<u>ಕರ್ನಾಟಕ ವಿಧಾನ ಪರಿಷತ್</u>

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 783 |
| ಮಾನ್ಯ ವಿಧಾನಪರಿಷತ್ತಿನ ಸದಸ್ಯರು | ಶ್ರೀಮತಿ ಭಾರತಿ ಶೆಟ್ಟಿ |
| ಉತ್ತರಿಸಬೇಕಾದ ದಿನಾಂಕ: | 15-12-2020 |
| ಉತ್ತರಿಸುವ ಸಚಿವರು | ಸಹಕಾರ ಸಚಿವರು |

<table>
<tr><th>ಕ್ರಮ ಸಂಖ್ಯೆ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಸಹಕಾರ ಇಲಾಖೆಯಲ್ಲಿ ಕಳೆದ 3 ವರ್ಷಗಳಲ್ಲಿ ಲೆಕ್ಕ ಪರಿಶೋಧನಾಇಲಾಖೆಯು ಸಂಗ್ರಹಿಸಿರುವ ಒಟ್ಟುಆಡಿಟ್ ಫೀ (ವರ್ಷವಾರು) ಮೊತ್ತ ಎಷ್ಟು:</td><td>
<table>
<tr><th>ವರ್ಷ</th><th>ಮೊತ್ತ</th></tr>
<tr><td>2017-18</td><td>13,58,81,481.00</td></tr>
<tr><td>2018-19</td><td>12,40,81,770.00</td></tr>
<tr><td>2019-20</td><td>10,45,72,104.00</td></tr>
</table>
</td></tr>
<tr><td>ಆ)</td><td>ಆರ್ಥಿಕ ವರ್ಷಗಳಲ್ಲಿ ಇಲಾಖೆಯ ಸಂಬಳ, ಸಾರಿಗೆ ಭತ್ಯೆ ಹಾಗೂ ಇತರ ಭತ್ಯೆ ಇತ್ಯಾದಿಗಳಿಗೆ ಖರ್ಚು ಮಾಡಿರುವ ಮೊತ್ತ ಎಷ್ಟು: (ವರ್ಷವಾರು ಮಾಹಿತಿ ನೀಡುವುದು)</td><td>
<table>
<tr><th>ಕ್ರ.ಸಂ</th><th>ವರ್ಷ</th><th>ಸಂಬಳ</th><th>ಸಾರಿಗೆ ಭತ್ಯೆ</th><th>ಇತರೆ ಭತ್ಯೆ</th></tr>
<tr><td>1.</td><td>2017-18</td><td>18,10,44,661.00</td><td>1,19,94,700.00</td><td>10,93,98,781.00</td></tr>
<tr><td>2.</td><td>2018-19</td><td>26,84,39,013.00</td><td>1,14,56,208.00</td><td>6,36,67,083.00</td></tr>
<tr><td>3.</td><td>2019-20</td><td>26,35,40,795.00</td><td>1,22,84,622.00</td><td>5,82,85,354.00</td></tr>
</table>
</td></tr>
<tr><td>ಇ)</td><td>ಚಾರ್ಟೆಡ್ ಅಕೌಂಟೆಂಟ್ ಆಡಿಟ್ ಆದ ಮೇಲೆ ಇಲಾಖೆಯ ಮುಂದಿನ ಕ್ರಮ ಏನು:</td><td>ಸಹಕಾರ ಸಂಘಗಳ ಕಾಯ್ದೆ ಕಲಂ 63(1) ಹಾಗೂ (2)ರಡಿ ನೇಮಕವಾದಚಾರ್ಟೆಡ್ಅಕೌಂಟೆಂಟ್‌ರವರು ಸಹಕಾರ ಸಂಘಗಳ ಕಾಯ್ದೆ ಕಲಂ 63(8)ರಂತೆ ಲೆಕ್ಕಪರಿಶೋಧನಾ ವರದಿಗಳನ್ನು ಸಂಬಂಧಿಸಿದ ಸಹಕಾರ ಸಂಘ, ಸಹಕಾರ ಸಂಘಗಳ ನಿಬಂಧಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಹಾಗೂ ಆರ್ಥಿಕ ನೆರವು ನೀಡುವ ಬ್ಯಾಂಕ್ ಹಾಗೂ ಸಂಸ್ಥೆಗಳಿಗೆ ಪ್ರತಿವರ್ಷದ ಸೆಪ್ಟಂಬರ್ 01ನೇ ದಿನಾಂಕದೊಳಗಾಗಿ ಕಳುಹಿಸಬೇಕಾಗಿರುತ್ತದೆ.<br><br>ಸಹಕಾರ ಸಂಘಗಳ ಕಾಯ್ದೆ ಕಲಂ 63(10)ರಂತೆ ಲೆಕ್ಕಪರಿಶೋಧನಾ ವರದಿಯಲ್ಲಿಸಂಘದಕಾರ್ಯಚಟುವಟಿಕೆಗೆ ಸಂಬಂದಿಸಿದಂತೆ ದೋಷಗಳುಕಂಡುಬಂದಿದ್ದಲ್ಲಿ ಸಂಘದ ಆಡಳಿತ ಮಂಡಳಿಯು ಸದರಿದೋಷಗಳನ್ನು ಸರಿಪಡಿಸಿ ತೆಗೆದುಕೊಂಡಕ್ರಮದ ಬಗ್ಗೆ ಸಂಘದ ಸಾಮಾನ್ಯ ಸಭೆಗೆಮಂಡಿಸಬೇಕಾಗಿರುತ್ತದೆ. ಆಡಳಿತ ಮಂಡಳಿಯು ಲೆಕ್ಕಪರಿಶೋಧನಾ ವರದಿಯಲ್ಲಿ</td></tr>
</table>

| | | |
|---|---|---|
| | | ಪ್ರಸ್ತಾಪಿಸಿದ ಎಲ್ಲಾದೋಷ ಹಾಗೂ ಅಕ್ರಮಗಳನ್ನು ಸರಿಪಡಿಸಲುಕ್ರಮ ಕೈಗೊಳ್ಳಬೇಕಾಗಿದ್ದು, ಎಲ್ಲಾ ಅಕ್ರಮಗಳನ್ನು ಸರಿಪಡಿಸುವವರೆಗೆ ಪ್ರತಿವರ್ಷ ಸಾಮಾನ್ಯ ಸಭೆಗೆ ಮಂಡಿಸಬೇಕಾಗಿರುತ್ತದೆ.<br>ಆಡಳಿತ ಮಂಡಳಿಯು ವಾರ್ಷಿಕ ಸಾಮಾನ್ಯ ಸಭೆಯ ದಿನಾಂಕದಿಂದ ಮೂವತ್ತು ದಿನಗೋಳಗೆ ಸಹಕಾರ ಸಂಘಗಳ ನಿಬಂಧಕರು ಹಾಗೂ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರಿಗೆಕ್ರಮತೆಗೆದುಕೊಂಡ ವರದಿಯನ್ನು ಸಲ್ಲಿಸಬೇಕಾಗಿರುತ್ತದೆ. |
| ಈ) | ವಾಣಿಜ್ಯ ವಿಷಯದಲ್ಲಿ ಪದವಿ ಹೊಂದಿದವರನ್ನುಆರ್ಥಿಕ ಇಲಾಖೆ ಸ್ವೀಕರಸಲು ಸಿದ್ಧವಿರುವಾಗ, ಇಲಾಖಾ ಸಿಬ್ಬಂದಿ-ಅಧಿಕಾರಿಗಳ ಸೇವೆಯನ್ನು ವಿಳಿತಗೊಳಿಸಲು ಸರ್ಕಾರಯಾವರೀತಿಕ್ರಮ ಕೈಗೊಳ್ಳಲಿದೆ;(ಹಣಕಾಸಿನ ವರದಿ ಶೀಫಾರಿಸ್ಸಿನ ಹಿನ್ನಲೆಯಲ್ಲಿ) | 6ನೇ ವೇತನ ಆಯೋಗದ 2ನೇ ವರದಿಯು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ ಮತ್ತುರಾಜ್ಯ ಲೆಕ್ಕಪತ್ರ ಇಲಾಖೆಗಳನ್ನು ವಿಲೀನಗೊಳಿಸಲು ಶಿಫಾರಸ್ಸು ಮಾಡಿರುತ್ತದೆ. ಆದರೆ ಸಹಕಾರ ಸಂಘಗಳ ಲೆಕ್ಕಪರಿಶೋಧನೆಯು ರಾಜ್ಯ ಲೆಕ್ಕಪತ್ರ ಇಲಾಖೆಯ ಲೆಕ್ಕಪರಿಶೋಧನೆಗಿಂತ ಸಂಪೂರ್ಣ ಭಿನ್ನವಾಗಿರುವುದರಿಂದ ಈ ಇಲಾಖೆಯನ್ನು ರಾಜ್ಯ ಲೆಕ್ಕಪತ್ರ ಇಲಾಖೆಗೆ ವಿಲೀನಗೊಳಿಸದೇ ಪ್ರತ್ಯೇಕವಾಗಿ ಉಳಿಸಲು ಸರ್ಕಾರವು ನಿರ್ಣಯ ಕೈಗೊಂಡಿದ್ದು, ಈ ನಿರ್ಣಯವನ್ನು ಸಿಆಸು ಇಲಾಖೆಗೆ (ಆಡಳಿತ ಸುಧಾರಣೆಗೆ) ತಿಳಿಸಲಾಗಿರುತ್ತದೆ. |
| ಉ) | ಆರ್ಥಿಕವಾಗಿ ಹೊರೆಯಾಗಿರುವ ಸದರಿ ಇಲಾಖೆ ಬಗ್ಗೆ ತುರ್ತಾದ ತೀರ್ಮಾನಗಳನ್ನು ಮತ್ತೊಮ್ಮೆ ಪರಿಶೀಲಿಸಿ ಕೈಗೊಳ್ಳುವ ಬಗ್ಗೆ ಸರ್ಕಾರದ ಕ್ರಮಗಳೇನು? | ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಯ ರಾಜಸ್ವ ಸಂಗ್ರಹಿಸುವ ಗುರಿಯನ್ನು ಇಟ್ಟು ಕೊಂಡಿರುವ ಇಲಾಖೆ ಯಾಗಿರುವುದಿಲ್ಲ. ಇಲಾಖಾ ಲೆಕ್ಕಪರಿಶೋಧಕರುಕೈಗೊಂಡ ಸಂಘಗಳ ಲೆಕ್ಕಪರಿಶೋಧನೆಗೆ ಸಂಬಂಧಿಸಿದಂತೆ ಮಾತ್ರ ಲೆಕ್ಕಪರಿಶೋಧನಾ ಶುಲ್ಕ ವಸೂಲಿ ಮಾಡಲಾಗುತ್ತದೆ. ಸಹಕಾರ ಸಂಘಗಳ ಲೆಕ್ಕಪರಿಶೋಧನೆಕುರಿತುಒಟ್ಟಾರೆ ಮೇಲ್ವಿಚಾರಣೆಇಲಾಖೆಯ ಮೂಲ ಕರ್ತವ್ಯವಾಗಿದ್ದು, ಸಹಕಾರ ಚಳುವಳಿಗೆ ಪೂರಕವಾಗಿಕಾರ್ಯನಿರ್ವಹಿಸುತ್ತಿದ್ದು, ಆರ್ಥಿಕ ಹೊರೆಯ ಅಂಶವು ಇಲಾಖೆಗೆ ಅನ್ವಯಿಸುವುದಿಲ್ಲ. |

ಕಡತ ಸಂಖ್ಯೆ: ಸಿಒ 153 ಸಿಇಎಂ 2020

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು